# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 264
ವಿಧಾನ ಪರಿಷತ್ ಸದಸ್ಯರ ಹೆಸರು : ಶ್ರೀ ಎನ್ ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವವರು : ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಮತ್ತು ಸಾರ್ವಜನಿಕ ವಲಯ ಉದ್ಯಮಗಳ ಸಚಿವರು
ಉತ್ತರಿಸಬೇಕಾದ ದಿನಾಂಕ : 14.12.2021

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಾಜ್ಯದ ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳ ಧೀರ್ಘಾವದಿ ಹಣದ ಅಗತ್ಯತೆಗಳನ್ನು ಪೂರೈಸಲು ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ನೆರವು ಪಡೆಯಲಾಗುತ್ತಿದೆಯೇ; ಹಾಗಿದ್ದಲ್ಲಿ, ಕಳೆದ 3 ವರ್ಷಗಳಲ್ಲಿ ಎಷ್ಟು ಕೈಗಾರಿಕೆಗಳಿಗೆ ನೆರವು ಒದಗಿಸಲಾಗಿದೆ; (ಜಿಲ್ಲಾವಾರು ವಿವರ ನೀಡುವುದು) | ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ರಾಜ್ಯದ ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳ ದೀರ್ಘಾವಧಿ ಹಣದ ಅಗತ್ಯತೆಗಳನ್ನು ಪೂರೈಸಲು ನೆರವು ನೀಡಲಾಗುತ್ತಿದ್ದು, ಕಳೆದ 3 ವರ್ಷಗಳಲ್ಲಿ ಕೈಗಾರಿಕೆಗಳಿಗೆ ನೆರವು ನೀಡಿರುವ ಜಿಲ್ಲಾವಾರು ವಿವರಗಳನ್ನು **ಅನುಬಂಧ-1ರಲ್ಲಿ** ನೀಡಲಾಗಿದೆ. |
| ಆ) | ಹಣಕಾಸು ಸಂಸ್ಥೆಯ ಮೂಲಕ ಸಮಾಜದ ದುರ್ಬಲ ವರ್ಗಗಳ ಉದ್ಯಮಿಗಳಿಗೆ/ಮೊದಲ ಪೀಳಿಗೆ ಉದ್ಯಮಿಗಳಿಗೆ ಸಹಾಯ ಮಾಡಲು ಯಾವ ಯಾವ ಯೋಜನೆಗಳನ್ನು ರೂಪಿಸಿ ನೆರವು ಒದಗಿಸಲಾಗಿದೆ; (ಆದೇಶ ಸಹಿತ ಯೋಜನಾವಾರು ಸಂಪೂರ್ಣ ವಿವರ ನೀಡುವುದು) | ಸಂಸ್ಥೆಯು ಸಮಾಜದ ದುರ್ಬಲ ವರ್ಗಗಳ ಉದ್ಯಮಿಗಳಿಗೆ / ಮೊದಲ ಪೀಳಿಗೆ ಉದ್ಯಮಿಗಳಿಗೆ ರೂಪಿಸಿರುವ ಯೋಜನೆಗಳ ವಿವರ:<br><br>1. **ಪರಿಶಿಷ್ಟ ಜಾತಿ / ಪಂಗಡದ ಉದ್ದಿಮೆದಾರರಿಗೆ ಬಡ್ಡಿ ಸಹಾಯಧನ ಯೋಜನೆ:**<br><br>• ಪರಿಶಿಷ್ಟ ಜಾತಿ / ಪಂಗಡದ ಉದ್ದಿಮೆದಾರರು ಬಡ್ಡಿ ಸಹಾಯಧನ ಯೋಜನೆಯಡಿಯಲ್ಲಿ ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ಗಾತ್ರದ ಘಟಕಗಳಿಗೆ ಮತ್ತು ಸೇವಾ ಕ್ಷೇತ್ರದ ಉದ್ದಿಮೆಗಳ ಸ್ಥಾಪನೆಗೆ ಹಾಗೂ ವಾಣಿಜ್ಯ ಕಟ್ಟಡ ನಿರ್ಮಾಣಕ್ಕೆ ಶೇ.4ರ ವಾರ್ಷಿಕ ಬಡ್ಡಿ ದರದಲ್ಲಿ ಅವಧಿಸಾಲವನ್ನು ನೀಡಲಾಗುತ್ತಿದೆ. ಕೆ.ಎಸ್.ಎಫ್.ಸಿ. ವಿಧಿಸುವ ಸಾಮಾನ್ಯ ಬಡ್ಡಿ ದರದ ವ್ಯತ್ಯಾಸ ಮೊತ್ತವನ್ನು ಬಡ್ಡಿ ಸಹಾಯಧನವೆಂದು ಪರಿಗಣಿಸಿ ಕರ್ನಾಟಕ ರಾಜ್ಯ ಸರ್ಕಾರದ ಸಮಾಜ ಕಲ್ಯಾಣ ಇಲಾಖೆಯಿಂದ ಮರುಪಾವತಿಸಲಾಗುತ್ತದೆ. ಈ ಯೋಜನೆಯಡಿ ಕನಿಷ್ಟ 10.00 ಲಕ್ಷ ರೂ.ಗಳಿಂದ ಗರಿಷ್ಟ 10.00 ಕೋಟಿ ರೂ.ಗಳವರೆಗೆ ಸಾಲದ ನೆರವು ದೊರೆಯುತ್ತದೆ. ಶೇ.4ರ ವಾರ್ಷಿಕ ಬಡ್ಡಿ ದರದಲ್ಲಿ ನೀಡಲಾಗುವ ಅವಧಿ ಸಾಲದ ಮರುಪಾವತಿಯ ಅವಧಿಯು ಗರಿಷ್ಠ 8 ವರ್ಷ.<br><br>• ಪರಿಶಿಷ್ಟ ಜಾತಿ / ಪಂಗಡದ ಉದ್ಯಮಿಗಳಿಗಾಗಿ ಅತಿ ಸಣ್ಣ ಮತ್ತು ಸಣ್ಣ ಪ್ರಮಾಣದ ಯೋಜನಾ ವೆಚ್ಚ ರೂ.2.00 ಕೋಟಿ ಮೀರದ ಕೈಗಾರಿಕೆಗಳನ್ನು ಹೊಸದಾಗಿ ಸ್ಥಾಪಿಸುವವರಿಗೆ ಪೂರಕ ಭದ್ರತೆ ಖಾತರಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ. |

| | | |
|---|---|---|
| | | **2.ಎಲ್ಲಾ ವರ್ಗದ ಉದ್ದಿಮೆದಾರರಿಗೆ ಬಡ್ಡಿ ಸಹಾಯಧನ ಯೋಜನೆ:**<br>ಸೂಕ್ಷ್ಮ ಹಾಗೂ ಸಣ್ಣ ಪ್ರಮಾಣದ ಹೊಸ ಮತ್ತು ಹಾಲಿ ಘಟಕಗಳ ಉತ್ಪಾದನೆಗೆ ಉಪಯೋಗಿಸುವ ಕಟ್ಟಡ ಮತ್ತು ಯಂತ್ರೋಪಕರಣಗಳಿಗೆ, ಕನಿಷ್ಠ ರೂ.5.00 ಲಕ್ಷ ಗರಿಷ್ಠ ರೂ.500.00 ಲಕ್ಷದವರೆಗೆ ಅವಧಿ ಸಾಲ. ಈ ಯೋಜನೆಯು ದಿನಾಂಕ 01.10.2018 ರಿಂದ ಜಾರಿಯಲ್ಲಿದೆ. ಈ ಮೊದಲು ಮೊದಲ ಪೀಳಿಗೆ ಉದ್ದಿಮೆದಾರರಿಗೆ ಈ ಯೋಜನೆಯಡಿಯಲ್ಲಿ ನೆರವು ನೀಡಲಾಗುತ್ತಿತ್ತು. ಈ ಯೋಜನೆ ಅನ್ವಯ ಅರ್ಹ ಉದ್ದಿಮೆದಾರರಿಗೆ ಶೇ.6 ರಷ್ಟು ಬಡ್ಡಿ ದರದಲ್ಲಿ ಸಾಲದ ಸೌಲಭ್ಯ ನೀಡಲಾಗುವುದು. ಕೆ.ಎಸ್.ಎಫ್.ಸಿ. ವಿಧಿಸುವ ಸಾಮಾನ್ಯ ಬಡ್ಡಿ ದರದ ವ್ಯತ್ಯಾಸ ಮೊತ್ತವನ್ನು ಬಡ್ಡಿ ಸಹಾಯಧನವೆಂದು ಪರಿಗಣಿಸಿ ಕರ್ನಾಟಕ ರಾಜ್ಯ ಸರ್ಕಾರದ ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆಯಿಂದ ಮರುಪಾವತಿಸಲಾಗುತ್ತದೆ.<br><br>**3. ಮಹಿಳಾ ಉದ್ದಿಮೆದಾರರಿಗೆ ಬಡ್ಡಿ ಸಹಾಯಧನ ಯೋಜನೆ:**<br>ಈ ಯೋಜನೆಯಡಿ ತಯಾರಿಕಾ ಕ್ಷೇತ್ರ ಹಾಗೂ ಸೇವಾ ಕ್ಷೇತ್ರದಲ್ಲಿ ಸಣ್ಣ ಹಾಗೂ ಮಧ್ಯಮ ವರ್ಗದ ಕೈಗಾರಿಕೆ ಘಟಕಗಳನ್ನು ಸ್ಥಾಪಿಸುವ ಮಹಿಳಾ ಉದ್ದಿಮೆದಾರರಿಗೆ 200.00 ಲಕ್ಷ ರೂ.ಗಳವರೆಗೆ ಶೇ.4 ರಷ್ಟು ಬಡ್ಡಿ ದರದಲ್ಲಿ ಸಾಲದ ಸೌಲಭ್ಯ ನೀಡಲಾಗುವುದು. ಕೆ.ಎಸ್.ಎಫ್.ಸಿ. ವಿಧಿಸುವ ಸಾಮಾನ್ಯ ಬಡ್ಡಿ ದರದ ವ್ಯತ್ಯಾಸ ಮೊತ್ತವನ್ನು ಬಡ್ಡಿ ಸಹಾಯಧನವೆಂದು ಪರಿಗಣಿಸಿ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಿಂದ ಮರುಪಾವತಿಸಲಾಗುತ್ತದೆ.<br><br>ಕಳೆದ ಮೂರು ವರ್ಷಗಳಲ್ಲಿ ರಾಜ್ಯ ಸರ್ಕಾರದ ಬಡ್ಡಿ ಸಹಾಯಧನ ಯೋಜನೆಯಡಿಯಲ್ಲಿ ಸಂಸ್ಥೆಯು ನೀಡಿರುವ ನೆರವಿನ ವಿವರಗಳನ್ನು ಅನುಬಂಧ-2ರಲ್ಲಿ ನೀಡಲಾಗಿದೆ. |
| ಇ) | ಸಂಸ್ಥೆಯ ಯೋಜನೆಗಳು ಹಾಗೂ ಸವಲತ್ತುಗಳ ಬಗ್ಗೆ ಗ್ರಾಮೀಣ ಭಾಗದಲ್ಲಿ ಸರಿಯಾದ ಮಾಹಿತಿ ಇಲ್ಲದೇ ಮಂಡ್ಯ ಜಿಲ್ಲೆಯ ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಉದ್ದಿಮೆದಾರರು ಸೌಲಭ್ಯದಿಂದ ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸಂಸ್ಥೆಯ ಯೋಜನೆಗಳು ಹಾಗೂ ಸವಲತ್ತುಗಳ ಬಗ್ಗೆ ಮಂಡ್ಯ ಜಿಲ್ಲೆಯಲ್ಲಿ ಹಮ್ಮಿಕೊಂಡಿರುವ ಕಾರ್ಯಕ್ರಮಗಳು ಈ ಕೆಳಕಂಡಂತಿದೆ :<br>• ಈಗಾಗಲೇ ಮಂಡ್ಯ ಜಿಲ್ಲೆಯಲ್ಲಿ ಉದ್ಯಮಿಗಳ ಅಭಿವೃದ್ಧಿ ಶಿಬಿರವನ್ನು ಜಿಲ್ಲಾ ಕೈಗಾರಿಕಾ ಕೇಂದ್ರದ ಸಹಯೋಗದೊಂದಿಗೆ ಮಂಡ್ಯ ಜಿಲ್ಲೆಯಲ್ಲಿ ನಡೆಸಲಾಗಿದೆ.<br>• ಮಂಡ್ಯ ಜಿಲ್ಲೆಯಲ್ಲಿ ಆಗಸ್ಟ್ 2021 ರಂದು ಸಿಡಾಕ್ ಸಂಸ್ಥೆಯವರು ಹಮ್ಮಿಕೊಂಡಿದ್ದ ಒಂದು ದಿನದ ಅರಿವಿನ ಶಿಬಿರದಲ್ಲಿ ಸಂಸ್ಥೆಯ ಸಾಲ ಯೋಜನೆಗಳ ಬಗ್ಗೆ ಸಂಕ್ಷಿಪ್ತವಾಗಿ ಪರಿಚಯಿಸಲಾಯಿತು.<br>• ಸಂಸ್ಥೆಯ ಸಾಲ ಯೋಜನೆಗಳ ಬಗ್ಗೆ ಪತ್ರಿಕಾ ಟಿಪ್ಪಣಿಯನ್ನು ಮಂಡ್ಯ ಜಿಲ್ಲೆಯ ದಿನಪತ್ರಿಕೆಗಳಲ್ಲಿ ಪ್ರಕಟಿಸಲಾಗಿದೆ. |
| ಈ) | ಹಾಗಿದ್ದಲ್ಲಿ, ಈ ಸಂಸ್ಥೆಯಿಂದ ದೊರೆಯುವ ಸವಲತ್ತುಗಳನ್ನು ತಲುಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಪ್ರತಿಯೊಂದು ಜಿಲ್ಲೆಯಲ್ಲಿಯೂ ಸಂಸ್ಥೆಯ ಶಾಖಾ ಕಚೇರಿಗಳು ಸ್ಥಾಪಿತವಾಗಿದೆ. ಈ ಶಾಖಾ ಕಛೇರಿಗಳು ಗ್ರಾಮಾಂತರ ಜಿಲ್ಲೆಯ ಜನ ಸಾಮಾನ್ಯರಿಗೆ / ಗ್ರಾಹಕರಿಗೆ ಮಾಹಿತಿ ಮತ್ತು ಸಾಲ ನೀಡುವ ಮೂಲಕ ಸೇವೆ ಸಲ್ಲಿಸುತ್ತಿದೆ. ಪ್ರತಿಯೊಂದು ಶಾಖಾ ಕಛೇರಿಯಲ್ಲಿಯೂ ಉದ್ಯಮಿಗಳ ಹಾಗೂ ಗ್ರಾಹಕರ |

| | | |
|---|---|---|
| | | ಮಾರ್ಗದರ್ಶನಕ್ಕಾಗಿ ಅನುಭವವುಳ್ಳ ಅಧಿಕಾರಿಗಳು ಇದ್ದು ಶಾಖಾ ಕಚೇರಿಗೆ ಭೇಟಿ ನೀಡುವ ಉದ್ಯಮಿಗಳಿಗೆ ಹಾಗೂ ಗ್ರಾಹಕರಿಗೆ ಸಂಸ್ಥೆಯ ಸಾಲ ಯೋಜನೆಗಳ ಬಗ್ಗೆ ಸೂಕ್ತ ಮಾಹಿತಿಯನ್ನು ನೀಡಲಾಗುತ್ತಿದೆ. ಸಂಸ್ಥೆಯ ಅಧಿಕಾರಿಗಳು ಜಿಲ್ಲೆಯಲ್ಲಿ ಇರುವ ಗ್ರಾಮೀಣ ಭಾಗಗಳಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಘಟಕಗಳಿಗೆ ಭೇಟಿ ನೀಡಿ ವಿವಿಧ ಯೋಜನೆಗಳ ಬಗ್ಗೆ ಮಾಹಿತಿಯನ್ನು ನೀಡಿ ಸಾಲ ಸೌಲಭ್ಯಗಳನ್ನು ಪಡೆಯಲು ಅನುಕೂಲ / ಸೂಕ್ತ ಮಾರ್ಗದರ್ಶನ ನೀಡಲಾಗುತ್ತಿದೆ.<br><br>ಶಾಖಾ ಕಚೇರಿಗಳು ಸಂಬಂಧಪಟ್ಟ ಲೀಡ್ ಬ್ಯಾಂಕ್, ಜಿಲ್ಲಾ ಕೈಗಾರಿಕಾ ಕೇಂದ್ರ ಹಾಗೂ ಖಾಸಗಿ ಸಂಘ ಸಂಸ್ಥೆಗಳೊಂದಿಗೆ ವಿವಿಧ ಕಾರ್ಯಾಗಾರಗಳು, ಸೆಮಿನಾರ್ ಹಾಗೂ ಸಮ್ಮೇಳನಗಳಲ್ಲಿ ಭಾಗವಹಿಸಿ ಸಂಸ್ಥೆಯು ಅತಿಸಣ್ಣ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕಾ ಘಟಕಗಳಿಗೆ ಲಭ್ಯವಿರುವ ವಿವಿಧ ಯೋಜನೆಗಳ ಮಾಹಿತಿಯನ್ನು ನೀಡಲಾಗುತ್ತಿದೆ. ಇದಲ್ಲದೇ ಶಾಖಾ ಕಚೇರಿಗಳು ಉದ್ಯಮಿಗಳಿಗೆ / ಗ್ರಾಹಕರಿಗೆ ಕೈಗಾರಿಕೋದ್ಯಮದ ಬಗ್ಗೆ ಅರಿವು ಮೂಡಿಸುವ ಕಾರ್ಯಾಗಾರಗಳನ್ನು ಪ್ರತ್ಯಕ್ಷವಾಗಿ ನಡೆಸಲಾಗುತ್ತದೆ.<br><br>ಸಂಸ್ಥೆಯು ರಾಜ್ಯದ ಪ್ರಮುಖ ಕನ್ನಡ ಮತ್ತು ಆಂಗ್ಲ ಭಾಷೆಗಳ ದಿನಪತ್ರಿಕೆಗಳಲ್ಲಿ ವಿವಿಧ ಯೋಜನೆಗಳ ಮಾಹಿತಿಯ ಜಾಹೀರಾತುಗಳನ್ನು ನೀಡುತ್ತಿದೆ.<br><br>ಸಂಸ್ಥೆಯ ವಿವಿಧ ಸಾಲ ಯೋಜನೆಗಳ ಸಂಪೂರ್ಣ ಮಾಹಿತಿಯು ಸಂಸ್ಥೆಯ ಜಾಲತಾಣ ksfc.karnataka.gov.in ನಲ್ಲಿ ಲಭ್ಯವಿದೆ. |

ಸಿಐ 198 ಎಸ್‌ಎಸ್‌ಐ 2021

(ಎನ್.ನಾಗರಾಜು (ಎಂ.ಟಿ.ಬಿ))
ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ
ಸಾರ್ವಜನಿಕ ವಲಯ ಉದ್ಯಮಗಳ ಸಚಿವರು

## ಅನುಬಂಧ-1: ಶ್ರೀ ಎನ್.ಅಪ್ಪಾಜಿಗೌಡ, ವಿಧಾನ ಪರಿಷತ್ ಸದಸ್ಯರು ಇವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ 218(264) ಕ್ಕೆ ಉತ್ತರ

### ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯಿಂದ ಕಳೆದ ಮೂರು ವರ್ಷಗಳಲ್ಲಿ ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳಿಗೆ ನೀಡಿರುವ ನೆರವಿನ ವಿವರ

ರೂ.ಲಕ್ಷಗಳಲ್ಲಿ

| ಜಿಲ್ಲೆಗಳು | 2018-19 | | | | | | 2019-20 | | | | | | 2020-21 | | | | | | 2021-22 (ಏಪ್ರಿಲ್ 2021-ನವೆಂಬರ್ 2021ರವರೆಗೆ) | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | ಸೂಕ್ಷ್ಮ | | ಸಣ್ಣ | | ಮಧ್ಯಮ | | ಸೂಕ್ಷ್ಮ | | ಸಣ್ಣ | | ಮಧ್ಯಮ | | ಸೂಕ್ಷ್ಮ | | ಸಣ್ಣ | | ಮಧ್ಯಮ | | ಸೂಕ್ಷ್ಮ | | ಸಣ್ಣ | | ಮಧ್ಯಮ | |
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಬೆಂಗಳೂರು ನ | 2 | 48.00 | 136 | 18678.40 | 3 | 900.00 | 5 | 191.10 | 82 | 8975.00 | 2 | 750.00 | 1 | 118.00 | 38 | 3408.75 | | | 2 | 150.00 | 28 | 3206.00 | | |
| ಬೆಂಗಳೂರು ಗ್ರಾ | 6 | 186.00 | 68 | 8542.50 | | | | | 31 | 4181.80 | | | 1 | 100.00 | 13 | 1558.00 | 1 | 300.00 | | | 10 | 1292.50 | | |
| ರಾಮನಗರ | 1 | 37.00 | 20 | 2339.25 | | | 3 | 50.75 | 18 | 2348.55 | | | 1 | 70.00 | 11 | 1000.00 | | | 2 | 105.00 | 4 | 870.00 | | |
| ತುಮಕೂರು | 7 | 183.00 | 40 | 4750.00 | | | 1 | 50.00 | 34 | 2961.80 | | | 13 | 546.00 | 14 | 1685.00 | 1 | 300.00 | 6 | 236.00 | 4 | 155.00 | | |
| ಕೋಲಾರ | | | 20 | 2501.75 | 2 | 580.00 | 1 | 35.00 | 18 | 3238.20 | | | 1 | 65.70 | 20 | 2517.00 | | | 5 | 358.00 | 10 | 1911.50 | | |
| ಚಿಕ್ಕಬಳ್ಳಾಪುರ | 3 | 70.00 | 17 | 2138.98 | | | | | 10 | 1367.00 | | | 1 | 19.25 | 3 | 564.00 | | | 3 | 72.00 | 3 | 287.05 | | |
| ಮೈಸೂರು | 4 | 102.00 | 71 | 8782.00 | 1 | 100.00 | 1 | 5.00 | 46 | 4067.00 | | | 6 | 175.00 | 33 | 3791.00 | | | 6 | 461.00 | 5 | 1019.00 | | |
| ಮಂಡ್ಯ | 4 | 135.00 | 13 | 1189.00 | 2 | 560.00 | 2 | 39.00 | 8 | 766.00 | 1 | 40.00 | 6 | 214.50 | 4 | 500.00 | 1 | 65.00 | 9 | 299.50 | 1 | 125.00 | | |
| ಕೊಡಗು | 3 | 107.30 | 10 | 2216.00 | 1 | 300.00 | 1 | 22.00 | 7 | 578.00 | | | 2 | 46.00 | 9 | 766.62 | | | | | 2 | 189.00 | | |
| ಚಾಮರಾಜನಗರ | 1 | 50.00 | 14 | 872.70 | 1 | 66.00 | 2 | 18.75 | 8 | 527.00 | | | 12 | 835.00 | 1 | 18.00 | | | 2 | 36.00 | 2 | 254.62 | | |
| ದಕ್ಷಿಣ ಕನ್ನಡ | 1 | 15.00 | 18 | 2743.50 | | | 2 | 16.00 | 14 | 626.00 | 2 | 835.00 | 3 | 49.00 | 8 | 729.00 | 1 | 60.00 | | | 1 | 375.00 | 2 | 115.00 |
| ಉಡುಪಿ | 1 | 6.00 | 14 | 892.00 | 1 | 700.00 | 1 | 7.50 | 8 | 675.00 | | | 3 | 158.00 | 3 | 210.00 | | | 1 | 27.00 | 5 | 305.00 | | |
| ಹಾಸನ | 7 | 231.50 | 20 | 2053.00 | 2 | 275.00 | 7 | 160.50 | 27 | 2536.80 | | | 9 | 216.00 | 23 | 1006.00 | | | 2 | 150.00 | 7 | 206.00 | | |
| ಚಿಕ್ಕಮಗಳೂರು | 3 | 54.00 | 11 | 1071.00 | | | 2 | 16.25 | 11 | 1327.00 | 1 | 200.00 | 6 | 321.50 | 7 | 249.15 | | | 1 | 2.70 | 2 | 522.00 | | |
| ಧಾರವಾಡ | 1 | 10.00 | 83 | 6791.00 | | | 1 | 30.00 | 42 | 2655.00 | 1 | 290.00 | 3 | 115.00 | 19 | 1724.70 | | | 1 | 46.00 | 7 | 985.00 | | |
| ಹಾವೇರಿ | 8 | 183.70 | 8 | 597.70 | 4 | 578.00 | 6 | 143.00 | 9 | 356.50 | | | 5 | 101.40 | 3 | 179.00 | | | 1 | 26.50 | 1 | 57.90 | | |
| ಗದಗ | 7 | 170.00 | 18 | 2038.00 | | | 2 | 91.00 | 13 | 982.00 | | | 1 | 100.00 | 5 | 289.00 | | | 2 | 22.00 | 3 | 127.00 | | |
| ಉತ್ತರಕನ್ನಡ | 6 | 241.00 | 12 | 1237.00 | | | 6 | 133.00 | 12 | 1165.50 | | | | | 2 | 250.00 | | | 2 | 30.00 | 1 | 198.00 | | |

ಅನುಬಂಧ–1: ಶ್ರೀ ಎನ್.ಅಪ್ಪಾಜಿಗೌಡ, ವಿಧಾನ ಪರಿಷತ್ ಸದಸ್ಯರು ಇವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ 218(264) ಕ್ಕೆ ಉತ್ತರ

ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯಿಂದ ಕಳೆದ ಮೂರು ವರ್ಷಗಳಲ್ಲಿ ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳಿಗೆ ನೀಡಿರುವ ನೆರವಿನ ವಿವರ

ರೂ.ಲಕ್ಷಗಳಲ್ಲಿ

| ಜಿಲ್ಲೆಗಳು | 2018–19 | | | | | | 2019–20 | | | | | | 2020–21 | | | | | | 2021–22 (ಏಪ್ರಿಲ್ 2021–ನವೆಂಬರ್ 2021ರವರೆಗೆ) | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | ಸೂಕ್ಷ್ಮ | | ಸಣ್ಣ | | ಮಧ್ಯಮ | | ಸೂಕ್ಷ್ಮ | | ಸಣ್ಣ | | ಮಧ್ಯಮ | | ಸೂಕ್ಷ್ಮ | | ಸಣ್ಣ | | ಮಧ್ಯಮ | | ಸೂಕ್ಷ್ಮ | | ಸಣ್ಣ | | ಮಧ್ಯಮ | |
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಚಿತ್ರದುರ್ಗ | 12 | 305.95 | 23 | 1795.25 | 1 | 300.00 | 3 | 59.00 | 24 | 1036.00 | | | 9 | 303.00 | 8 | 780.00 | | | | | 4 | 268.50 | | |
| ಶಿವಮೊಗ್ಗ | 4 | 110.00 | 22 | 1277.00 | 2 | 448.00 | 3 | 32.00 | 12 | 750.00 | 1 | 74.00 | 6 | 343.90 | 2 | 49.00 | | | 2 | 31.00 | 6 | 462.75 | | |
| ಬೆಳಗಾವಿ | 2 | 38.30 | 33 | 3780.70 | | | | | 26 | 2270.50 | 1 | 489.00 | | | 16 | 1309.00 | | | | | 5 | 937.00 | | |
| ಬಾಗಲಕೋಟೆ | 1 | 39.00 | 27 | 3158.95 | | | 3 | 94.00 | 18 | 1715.00 | | | 1 | 35.00 | 15 | 1301.30 | | | | | 4 | 412.85 | | |
| ಕಲಬುರಗಿ | 17 | 615.50 | 40 | 3564.00 | | | 11 | 289.00 | 24 | 3617.50 | | | 4 | 360.00 | 16 | 1680.00 | | | 1 | 20.00 | 1 | 63.00 | | |
| ಯಾದಗಿರಿ | | | 9 | 975.00 | 3 | 319.00 | 1 | 20.00 | 12 | 894.00 | | | | | 5 | 547.00 | 1 | 50.00 | | | 1 | 75.00 | | |
| ರಾಯಚೂರು | 1 | 25.00 | 11 | 1144.90 | 2 | 300.00 | 1 | 40.00 | 7 | 822.00 | | | 2 | 78.00 | 6 | 1038.00 | | | | | 2 | 428.00 | | |
| ಬೀದರ್ | 13 | 568.00 | 15 | 908.00 | 1 | 148.00 | 7 | 244.00 | 14 | 2023.00 | 1 | 500.00 | 11 | 381.50 | 24 | 2078.00 | | | 4 | 230.00 | 3 | 264.00 | | |
| ಕೊಪ್ಪಳ | | | 22 | 2881.00 | | | 1 | 65.00 | 15 | 1699.00 | 1 | 480.00 | | | 12 | 857.00 | | | 2 | 62.00 | 4 | 180.00 | | |
| ಬಳ್ಳಾರಿ | 2 | 46.00 | 17 | 3337.80 | | | | | 6 | 1449.50 | | | 1 | 60.00 | 5 | 581.00 | | | 1 | 35.00 | 2 | 50.00 | | |
| ದಾವಣಗೆರೆ | 12 | 293.50 | 19 | 2065.10 | 1 | 145.00 | 7 | 261.50 | 11 | 700.00 | | | 9 | 424.00 | 3 | 375.30 | | | 4 | 310.00 | 8 | 579.20 | 1 | 69.00 |
| ವಿಜಯಪುರ | | | 36 | 2166.87 | 1 | 30.00 | | | 28 | 1983.54 | | | | | 28 | 1434.00 | | | | | 7 | 656.00 | 1 | 23.0 |
| ಒಟ್ಟು | 129 | 3870.75 | 867 | 96488.35 | 28 | 5749.00 | 80 | 2113.35 | 595 | 58294.19 | 11 | 3658.00 | 117 | 5235.75 | 356 | 32474.82 | 5 | 775.00 | 59 | 2709.70 | 143 | 16461.87 | 4 | 207.0 |

## ಅನುಬಂಧ–2: ಶ್ರೀ ಎನ್.ಅಪ್ಪಾಜಿಗೌಡ, ವಿಧಾನ ಪರಿಷತ್ ಸದಸ್ಯರು ಇವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ 218(264) ಕ್ಕೆ ಉತ್ತರ

### ರಾಜ್ಯ ಸರ್ಕಾರದ ಬಡ್ಡಿ ಸಹಾಯಧನ ಯೋಜನೆಗಳಲ್ಲಿ ಸಂಸ್ಥೆಯು ಕಳೆದ ಮೂರು ವರ್ಷಗಳಲ್ಲಿ ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ ನೀಡಿರುವ ಸಾಲ ಮತ್ತು ಬಡ್ಡಿ ಸಹಾಯಧನ ವಿವರಗಳು

(ಮೊತ್ತ ಲಕ್ಷ ರೂ.ಗಳಲ್ಲಿ)

| ಯೋಜನೆಗಳು | 2019-20 | | | | 2020-21 | | | | 2021-22 (ಏಪ್ರಿಲ್ 2021 ರಿಂದ ನವೆಂಬರ್ 2021ರವರೆಗೆ) | | | |
|---|---|---|---|---|---|---|---|---|---|---|---|---|
| | ಸಾಲ | | ಸಹಾಯಧನ | | ಸಾಲ | | ಸಹಾಯಧನ | | ಸಾಲ | | ಸಹಾಯಧನ | |
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಪರಿಶಿಷ್ಟ ಜಾತಿ | 169 | 11253.00 | 804 | 4458.51 | 150 | 125.99 | 770 | 4778.62 | 59 | 5361.95 | 767 | 3162.11 |
| ಪರಿಶಿಷ್ಟ ಪಂಗಡ | 52 | 3539.00 | 292 | 1456.99 | 42 | 3503.00 | 289 | 1552.04 | 21 | 1781.58 | 277 | 1052.61 |
| ಮಹಿಳಾ ಉದ್ದಿಮೆದಾರರು | 165 | 14515.30 | 959 | 3729.78 | 8 | 1100.00 | 982 | 5883.91 | - | - | 910 | 3015.80 |
| ಮೊದಲನೇ ಪೀಳಿಗೆ ಉದ್ದಿಮೆದಾರರಿಗೆ (ಈ ಯೋಜನೆಯು ಅಕ್ಟೋಬರ್ 2018ರಲ್ಲಿ ಕೊನೆಗೊಂಡಿದ್ದು, ನಂತರ ಯಾವುದೇ ಮಂಜೂರಾತಿ ಮಾಡಿರುವುದಿಲ್ಲ. ಆದರೆ, ಅಕ್ಟೋಬರ್ 2018ಕ್ಕೆ ಮೊದಲು ಮಂಜೂರಾಗಿದ್ದ ಸಾಲಗಳು ಇನ್ನೂ ಚಾಲ್ತಿಯಲ್ಲಿರುವುದರಿಂದ ಆ ಸಾಲದ ಖಾತೆಗಳಿಗೆ 2019-20ರಿಂದ ಸಂದಾಯ ಮಾಡಿರುವ ಸಬ್ಸಿಡಿ ಮೊತ್ತವನ್ನು | - | - | 212 | 416.76 | - | - | 189 | 338.28 | - | - | 148 | 168.46 |
| ಎಲ್ಲಾ ವರ್ಗದ ಉದ್ದಿಮೆದಾರರಿಗೆ ಅತಿ ಸಣ್ಣ ಮತ್ತು ಸಣ್ಣ ಪ್ರಮಾಣದ ಘಟಕಗಳನ್ನು ಸ್ಥಾಪಿಸಲು ಬಡ್ಡಿ ಸಹಾಯಧನ (Interest Subvention) | 262 | 26285.50 | 378 | 1776.24 | 189 | 18455.66 | 505 | 3635.85 | 97 | 11128.87 | 596 | 2852.30 |